KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಏಪ್ರಿಲ್ ೨೨, ೨೦೧೦ (ವೈಶಾಖ ೨, ಶಕ ವರ್ಷ ೧೯೩೨) | ಸಂಚಿಕೆ ೧೬ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ
### ತಿದ್ದುಪಡಿ ಅಧಿಸೂಚನೆ
**ಸಂಖ್ಯೆ: ಸಿಐ 160 ಎಸ್‌ಪಿಕ್ಯೂ 2008, ಬೆಂಗಳೂರು, ದಿನಾಂಕ:30ನೇ ಮಾರ್ಚ್, 2010**

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966ರ ಕಲಂ 28(1)ರಡಿ ಸರ್ಕಾರದ ಅಧಿಸೂಚನೆ ಕ್ರಮಸಂಖ್ಯೆ: ಸಿಐ 551 ಎಸ್‌ಪಿಕ್ಯೂ 2007 ದಿನಾಂಕ:11.07.2007, ದಿನಾಂಕ:12.07.2007 ರಂದು ಕರ್ನಾಟಕ ರಾಜ್ಯ ಪತ್ರ ಭಾಗ–3 ಪುಟ ಸಂಖ್ಯೆ:17ರ ಅ.ನಂ.26ರಲ್ಲಿ ಪ್ರಕಟವಾದ ಅಧಿಸೂಚನೆಯ ಶೀರ್ಷಿಕೆಗಳು ಅಂಕಣ (2)ರಲ್ಲಿಯ ಹೆಸರುಗಳು ಮಾತ್ರ ತಪ್ಪಾಗಿದ್ದು, ಈ ಕೆಳಗಿನಂತೆ ತಿದ್ದುಪಡಿ ಮಾಡಿ ಈ ಮೂಲಕ ಅಧಿಸೂಚನೆ ಹೊರಡಿಸಲಾಗಿದೆ.

**ಗ್ರಾಮ: ಮದಭಾವಿ** **ತಾಲ್ಲೂಕು: ಬಿಜಾಪುರ** **ಜಿಲ್ಲೆ: ಬಿಜಾಪುರ**

| ತಪ್ಪಾಗಿ ಪ್ರಕಟವಾದ ವಿವರ | | ತಿದ್ದುಪಡಿ ಮಾಡಬೇಕಾದ ವಿವರ | |
|---|---|---|---|
| ಅ. ನಂ. | ಹೆಸರು | ಅ. ನಂ. | ಹೆಸರು |
| 26. | 1. ಅಮೋಗಿ ತಂ ಚೌಡಪ್ಪ ಬಂಡಿವಡ್ಡರ | 26. | 1. ಅಮೋಗಿ ತಂ ಚೌಡಪ್ಪ ಬಂಡಿವಡ್ಡರ |
| | 2. ಸತ್ತು ತಂ ಶೆಟೆಬಾ ಕೊಡೇಕರ | | 2. ಸತ್ತು ತಂ ಶೆಟೆಬಾ ಕೊಡೇಕರ |
| | 3. ಚಂದ್ರಭಾಗಾ ತಂ ವಿಠಲ ಗಡ್ಡೆಪ್ಪಗೌಳಿ | | 3. 1. ಮಲ್ಲಿಕಾರ್ಜುನ ತಂ ಸಿದ್ದಗೌಡ ಬಿರಾದಾರ<br>2. ಸಿದ್ದನಗೌಡ ತಂ ಶಾಂತನಗೌಡ ಬಿರಾದಾರ<br>3. ರಾಜೇಶ್ವರಿ ತಂ ಸಿದ್ದನಗೌಡ ಬಿರಾದಾರ<br>4. ಗೀತಾ ತಂ ಸಿದ್ದನಗೌಡ ಬಿರಾದಾರ |
| | 4. ಭೀಮಪ್ಪ ತಂ ದುರಗಪ್ಪ ಮಾದರ | | 4. ಭೀಮಪ್ಪ ತಂ ದುರುಗಪ್ಪ ಮಾದರ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಂ. ವೀರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ.)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

### ತಿದ್ದುಪಡಿ ಅಧಿಸೂಚನೆ

**ಸಂಖ್ಯೆ: ಸಿಐ 160 ಎಸ್‌ಪಿಕ್ಯೂ 2008, ಬೆಂಗಳೂರು, ದಿನಾಂಕ:30ನೇ ಮಾರ್ಚ್, 2010**

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966ರ ಕಲಂ 28(4)ರಡಿ ಸರ್ಕಾರದ ಅಧಿಸೂಚನೆ ಕ್ರಮಸಂಖ್ಯೆ: ಸಿಐ 160 ಎಸ್‌ಪಿಕ್ಯೂ 2008 ದಿನಾಂಕ:19.05.2008, ದಿನಾಂಕ:21.05.2008 ರಂದು ಕರ್ನಾಟಕ ರಾಜ್ಯ ಪತ್ರ ಭಾಗ–3 ಪುಟ ಸಂಖ್ಯೆ:11ರ ಅ.ನಂ.48ರಲ್ಲಿ ಪ್ರಕಟವಾದ ಅಧಿಸೂಚನೆಯ ಶೀರ್ಷಿಕೆಗಳು ಅಂಕಣ (2)ರಲ್ಲಿಯ ಹೆಸರುಗಳು ಮಾತ್ರ ತಪ್ಪಾಗಿದ್ದು, ಈ ಕೆಳಗಿನಂತೆ ತಿದ್ದುಪಡಿ ಮಾಡಿ ಈ ಮೂಲಕ ಅಧಿಸೂಚನೆ ಹೊರಡಿಸಲಾಗಿದೆ.

**ಗ್ರಾಮ: ಮದಭಾವಿ ತಾಲ್ಲೂಕು: ಬಿಜಾಪುರ ಜಿಲ್ಲೆ: ಬಿಜಾಪುರ**

| ತಪ್ಪಾಗಿ ಪ್ರಕಟವಾದ ವಿವರ | | ತಿದ್ದುಪಡಿ ಮಾಡಬೇಕಾದ ವಿವರ | |
|---|---|---|---|
| ಅ. ನಂ. | ಹೆಸರು | ಅ. ನಂ. | ಹೆಸರು |
| 48. | 1. ಅಮೋಘ ತಂ ಚೌಡಪ್ಪ ಬಂಡಿವಡ್ಡರ 08–08 | 48. | 1. ಅಮೋಗಿ ತಂ ಚೌಡಪ್ಪ ಬಂಡಿವಡ್ಡರ 08–08 |
| | 2. ಸತ್ತು ತಂ ಶೆಟ್ಟಪ್ಪ ಕೊಡೇಕರ 06–08 | | 2. ಸತ್ತು ತಂ ಶೆಟ್ಟಪ್ಪ ಕೊಡೇಕರ 06–08 |
| | 3. ಚಂದ್ರಭಾಗಾ ತಂ ವಿಠಲ ಗಡ್ಡೆಪ್ಪಗೌಳಿ 07–00 | | 3. 1. ಮಲ್ಲಿಕಾರ್ಜುನ ತಂ ಸಿದ್ದಗೌಡ ಬಿರಾದಾರ<br>2. ಸಿದ್ದನಗೌಡ ತಂ ಶಾಂತನಗೌಡ ಬಿರಾದಾರ<br>3. ರಾಜೇಶ್ವರಿ ತಂ ಸಿದ್ದನಗೌಡ ಬಿರಾದಾರ<br>4. ಗೀತಾ ತಂ ಸಿದ್ದನಗೌಡ ಬಿರಾದಾರ (07–00) |
| | 4. ಭೀಮಪ್ಪ ತಂ ದುರಗಪ್ಪ ಮಾದರ 03–00 | | 4. ಭೀಮಪ್ಪ ತಂ ದುರುಗಪ್ಪ ಮಾದರ 03–00 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಂ. ವೀರಯ್ಯ**

ಪಿ.ಆರ್.558

ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ.)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## IN THE COURT OF CHIEF METROPOLITAN MAGISTRATE, BANGALORE CITY

It is here by notified to the public that the Yelahanka new town Police Station Bangalore City have Seized the following vehicles as unclaimed and such vehicle are lying the Police Station as unclaimed so far. Hence the owners of the properties may put their claim within one month from the date of this publication.

Bangalore City
Date:05.04.2010

Chief Metropolitan Magistrate Court,
Nrupatunga Road, Bangalore City.

List of unclaimed vehicles are lying in Yelahanka New Town Police Station Bangalore City Which have been seized under crime and cimiss cases.

| Sl. No. | Type of Vehicle | Reg No. | Chassis No. | Engine No. |
|---|---|---|---|---|
| 1. | IND SUZUKI M/C | CKR-6720 | 1809-F-18305 | 1808-M-189316 |
| 2. | KINETIC HONDA SCOOTER | KA-09-H-7630 | NIL | H-312232 |
| 3. | BAJAJ CHETHAK SCOOTER | KA-05-K-5165 | 08C93G40110 | 08E993240914 |
| 4. | BAJAJ PULSOR D.T.S.-150 M/C | KA-01-EZ-6345 | MD2DHDJZZPCM14067 | DJBPL19455 |

| Sl. No. | Type of Vehicle | Reg No. | Chassis No. | Engine No. |
|---|---|---|---|---|
| 5. | T.V.S. HEAVY DUTY | KA-05-HC-9601 | MD621BD1372 E 5995 | 001E71054844 |
| 6. | SUZUKI MAX-100 M/C | CKK-2116 | NIL | 5801M157832 |
| 7. | BAJAJ PULSOR M/C | KA-02-EH-382 | DJVBJK32192 | DJGBJK323551 |
| 8. | LAP TOP | I.B.M. ThinkPad | - | - |
| 9. | 2 CAR Sterieo | - | - | - |
| 10. | 2 Old Indica Car Wheels | - | - | - |

Chief Metropolitan Magistrate Court,

PR-571 Nrupatunga Road, Bangalore City.

**GOVERNMENT OF KARNATAKA**

**DIRECTORATE OF ECONOMICS AND STATISTICS, BANGALORE-1**

**Consumer Price Index Numbers For Industrial Workers**

No. DES 24 PWX 2010 Month: January, 2010

State: Karnataka Base: 1987-88=100 Date :01-04-2010

| | **Group/Sub-Group** | **Bellary** | **Bhadra-vathi** | **Davan gere** | **Dan deli** | **Gul barga** | **Hari har** | **Hassan** | **Man dya** | **Man galore** | **Rai chur** | **Tum kur** |
|---|---|---|---|---|---|---|---|---|---|---|---|---|
| | **1** | **2** | **3** | **4** | **5** | **6** | **7** | **8** | **9** | **10** | **11** | **12** |
| I. | **FOOD:** (a) Cereals & Products | 661 | 653 | 665 | 542 | 535 | 602 | 581 | 669 | 514 | 647 | 683 |
| | (b) Pulses & Products | 701 | 691 | 754 | 845 | 691 | 721 | 732 | 651 | 725 | 774 | 763 |
| | (c) Oil & Fats | 312 | 298 | 258 | 299 | 303 | 306 | 290 | 306 | 252 | 305 | 277 |
| | (d) Meat, Fish & Eggs | 632 | 647 | 662 | 547 | 679 | 581 | 496 | 588 | 826 | 710 | 525 |
| | (e) Milk & Products | 395 | 371 | 412 | 390 | 412 | 430 | 371 | 436 | 356 | 441 | 360 |
| | (f) Condiments & Spices | 502 | 528 | 774 | 615 | 405 | 432 | 502 | 474 | 518 | 558 | 479 |
| | (g) Vegetables & Fruits | 628 | 478 | 564 | 691 | 516 | 518 | 586 | 439 | 463 | 468 | 468 |
| | (h) Other Food | 523 | 593 | 563 | 603 | 552 | 499 | 504 | 471 | 419 | 530 | 530 |
| | **FOOD GROUP INDEX** | **569** | **563** | **605** | **563** | **514** | **522** | **517** | **561** | **523** | **579** | **545** |
| II. | Pan, Supari, Tobacco & Intoxicants | 443 | 561 | 571 | 394 | 379 | 572 | 506 | 396 | 357 | 376 | 509 |

| Group/Sub-Group | | Bellary | Bhadra-vathi | Davangere | Dandeli | Gulbarga | Harihar | Hassan | Mandya | Mangalore | Raichur | Tumkur |
|---|---|---|---|---|---|---|---|---|---|---|---|---|
| 1 | | 2 | 3 | 4 | 5 | 6 | 7 | 8 | 9 | 10 | 11 | 12 |
| III. | Fuel & Light | 337 | 383 | 454 | 528 | 463 | 398 | 377 | 429 | 336 | 603 | 319 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 275 | 276 | 302 | 393 | 334 | 257 | 428 | 498 | 257 | 582 | 233 |
| VI. | **MISCELLANEOUS:** (a) Medical Care | 663 | 815 | 400 | 437 | 319 | 253 | 456 | 415 | 322 | 426 | 242 |
| | (b) Education, Recreation & Amusement | 455 | 455 | 807 | 260 | 454 | 469 | 369 | 354 | 662 | 509 | 546 |
| | (c) Transport & Communication | 422 | 496 | 405 | 397 | 597 | 531 | 453 | 569 | 464 | 393 | 449 |
| | (d) Personal Care & effects | 332 | 336 | 365 | 329 | 403 | 297 | 332 | 325 | 349 | 305 | 308 |
| | (e) Others<br>Miscellaneous Group | 394<br>445 | 405<br>443 | 435<br>473 | 519<br>393 | 366<br>411 | 297<br>340 | 320<br>371 | 347<br>359 | 320<br>412 | 557<br>449 | 281<br>346 |
| | **GENERAL INDEX** | **452** | **447** | **484** | **462** | **416** | **404** | **430** | **454** | **426** | **501** | **381** |
| | To convert to Base 1960 Multiply by Linking Factor. | **7.39** | **9.19** | **8.27** | **...** | **8.26** | **8.56** | **9.25** | **7.92** | **9.31** | **...** | **...** |

For Director.

**Government of India**

**Ministry of Labour and Employment**

**Labour Bureau**

**'Cleremont', Shimla-171004**

**Dated:8th March, 2010**

**CONSUMER PRICE INDEX NUMBERS OF INDUSTRIAL WORKERS ON BASE-2001=100**

State: Karnataka Dated: Month/Year: 01/2010

| Group/Sub-group | Bangalore | Belgaum | Hubli-Dharwar | Mercara | Mysore |
|---|---|---|---|---|---|
| 1 | 2 | 3 | 4 | 5 | 6 |
| **Food Sub-Groups** | | | | | |
| (a) Cereals & Products | 206 | 196 | 202 | 183 | 203 |
| (b) Pulses & Products | 256 | 249 | 278 | 243 | 236 |
| (c) Oils & Fats | 172 | 163 | 171 | 160 | 157 |
| (d) Meat, Fish & Eggs | 205 | 218 | 214 | 181 | 207 |
| (e) Milk & Milk Products | 149 | 152 | 127 | 143 | 153 |

| Group/Sub-group | Bangalore | Belgaum | Hubli-Dharwar | Mercara | Mysore |
|---|---|---|---|---|---|
| **1** | **2** | **3** | **4** | **5** | **6** |
| (f) Condiments & Spices | 206 | 184 | 184 | 176 | 210 |
| (g) Vegetables & Fruits | 164 | 209 | 177 | 171 | 168 |
| (h) Other Food | 195 | 200 | 188 | 201 | 192 |
| **I. FOOD GROUP** | 192 | 195 | 192 | 185 | 190 |
| II-Pan, Supari, Tobacco & Intoxicants | 169 | 155 | 160 | 133 | 164 |
| III-Fuel & Light Group | 124 | 137 | 139 | 222 | 142 |
| IV-Housing Group | 191 | 179 | 207 | 113 | 191 |
| V-Clothing, Bedding & Footwear | 109 | 119 | 130 | 128 | 116 |
| **Miscellaneous Sub-groups:** | | | | | |
| (a) Medical Care | 158 | 158 | 139 | 155 | 140 |
| (b) Education, Recreation & Amusement | 142 | 146 | 158 | 151 | 119 |
| (c) Transport & Communication | 197 | 198 | 194 | 160 | 168 |
| (d) Personal Care & effects | 161 | 149 | 156 | 139 | 146 |
| (e) Others Miscellaneous Itemes | 184 | 152 | 170 | 175 | 175 |
| **VI. Miscellaneous Group** | 169 | 160 | 162 | 151 | 146 |
| **Centre Index** | 177 | **176** | 180 | **169** | **172** |

**S.K. PRABHAKAR**

PR-575 ECONOMIC OFFICER.

**ಕಂದಾಯ ಇಲಾಖೆ**

**ತಿದ್ದುಪಡಿ**

**ಸಂಖ್ಯೆ: ಕಂಇ 30 ಮನೋಮು 2010, ಬೆಂಗಳೂರು, ದಿನಾಂಕ:3ನೇ ಮಾರ್ಚ್, 2010**

ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 96 ಮುನೋಮು 2009 ದಿನಾಂಕ:26.10.2009ರಲ್ಲಿ ಎರಡನೇ ಸಾಲಿನಲ್ಲಿ **"ಖರೀದಿಸಲಿರುವ"** ಎಂದಿರುವುದನ್ನು **"ದಾನಪತ್ರದ ಮೂಲಕ ಅಥವಾ ಇತರೆ ಯಾವುದೇ ರೂಪದಲ್ಲಿ ಹೊಂದಲಿರುವ"** ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ. ರಾಮಚಂದ್ರ**

ಪಿ.ಆರ್.457 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**ನೋಂದಣಿ ಪ್ರಾಧಿಕಾರ ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೆಂಗಳೂರು (ಉತ್ತರ), ಯಶವಂತಪುರ ಬೆಂಗಳೂರು–22, ಇವರ ಕಛೇರಿ ನಡಾವಳಿ**

**ಉಪಸ್ಥಿತರು:** ಶ್ರೀ ರುದ್ರಾನಾಯಕ್

ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರ, ಬೆಂಗಳೂರು (ಉತ್ತರ).

**ವಿಷಯ:** ವಾಹನ ಸಂಖ್ಯೆ: ಕೆಎ–04–1611 (ಪಿಎಸ್‌ವಿ) ರ ನೋಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1) ವಾಹನದ ಅಧ್ಯರ್ಪಣ ಸಂಖ್ಯೆ: ಎಸ್.ಆರ್.ಸಂಖ್ಯೆ:12/09–10.

2) ಮೋ.ವಾ.ನಿ. ರವರ ವರದಿ ದಿನಾಂಕ:18.01.2010.

3) ಮಾಲೀಕರ ಅರ್ಜಿ ದಿನಾಂಕ:16.11.2009.

**ಪ್ರಸ್ತಾವನೆ:**

ವಾಹನ ಸಂಖ್ಯೆ: ಕೆಎ–04–1611 (ಪಿಎಸ್‌ವಿ)ರ ಮಾಲೀಕರಾದ The General Manager, Bharat Electronics Ltd., Jalahalli Post, Bangalore-560 013 ರವರು ದಿನಾಂಕ:16.11.2009 ರಂದು ಈ ಕಛೇರಿಗೆ ಅರ್ಜಿ ಸಲ್ಲಿಸಿ, ವಾಹನವು ದುರಸ್ತಿ ಮಾಡಲಾರದ ಸ್ಥಿತಿಯಲ್ಲಿರುವುದರಿಂದ ನೋಂದಣಿಯನ್ನು ರದ್ದುಪಡಿಸಲು ಕೋರಿರುತ್ತಾರೆ. ದಿನಾಂಕ:08.09.2009 ರಿಂದ ವಾಹನವನ್ನು ಎಸ್.ಆರ್.ನಂ.12/09–10ರ ಅನ್ವಯ ಅಧ್ಯರ್ಪಣೆ ಮಾಡಿರುತ್ತಾರೆ. ಈ ಕಛೇರಿಯ ಮೋಟಾರು ವಾಹನ ನಿರೀಕ್ಷಕರು ವಾಹನವನ್ನು ಪರೀಕ್ಷಿಸಿ, ದಿನಾಂಕ:18.01.2010ರಂದು ವರದಿ ನೀಡಿ, ವಾಹನವು ದುರಸ್ತಿ ಮಾಡಲಾಗದ ಸ್ಥಿತಿಯಲ್ಲಿದ್ದು, ರಸ್ತೆಯಲ್ಲಿ ಓಡಾಡಲು ಯೋಗ್ಯವಾಗಿಲ್ಲದ ಕಾರಣ ವಾಹನದ ನೋಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ದಿನಾಂಕ:30.11.2009ರ ಅವಧಿವರೆಗೆ ವಾಹನಕ್ಕೆ ತೆರಿಗೆಯನ್ನು ಪಾವತಿಸಿರುತ್ತಾರೆ.

ಸದರಿ ವಾಹನವು ರಸ್ತೆಯ ಮೇಲೆ ಸಂಚರಿಸಲು ಯೋಗ್ಯವಾಗಿರುವುದಿಲ್ಲವೆಂದು ಪರಿಗಣಿಸಿ ಮೋಟಾರು ವಾಹನ ಸಂಖ್ಯೆ: ಕೆಎ–04–1611 (ಪಿಎಸ್‌ವಿ) ರ ನೋಂದಣಿಯನ್ನು ವಾಹನ ಅಧ್ಯರ್ಪಣೆಯಲ್ಲಿರುವಂತೆ ಷರತ್ತಿನೊಂದಿಗೆ ರದ್ದುಪಡಿಸಲು ಈ ಕೆಳಗಿನಂತೆ ಆದೇಶಿಸಿರುತ್ತೇನೆ.

**ಆದೇಶ ಸಂಖ್ಯೆ: ಪ್ರಾ.ಸಾ.ಅ./ಬೆಂ(ಉ) ಕೆಎ–04–1611 (ಪಿಎಸ್‌ವಿ)/09–10, ದಿನಾಂಕ:20ನೇ ಫೆಬ್ರವರಿ, 2010**

1988ರ ಕೇಂದ್ರ ಮೋಟಾರು ವಾಹನ ಕಾಯ್ದೆ ವಿಧಿ 55(2)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ರುದ್ರಾನಾಯಕ್, ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರಿ ಆದ ನಾನು, ಮೇಲ್ಕಂಡ ಕಾರಣಗಳಿಂದಾಗಿ, ಮೋಟಾರು ವಾಹನ ಸಂಖ್ಯೆ: ಕೆಎ–04–1611 (ಪಿಎಸ್‌ವಿ)ರ ಮೇಲೆ ಏನಾದರೂ ತೆರಿಗೆ, ಆಡಿಟ್, ಇಲಾಖಾ ಪ್ರಕರಣಗಳು ಬಾಕಿ ಇರುವುದು ಕಂಡು ಬಂದ್ದಲ್ಲಿ ವಾಹನದ ಮಾಲೀಕರೇ ಪಾವತಿಸಬೇಕೆಂಬ ನಿಬಂಧನೆಯೊಂದಿಗೆ ಸದರಿ ವಾಹನದ ನೋಂದಣಿಯನ್ನು ಅಧ್ಯರ್ಪಣೆಯಲ್ಲಿರುವಂತೆಯೇ ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು**

| | | |
|---|---|---|
| 1. | ಮೋಟಾರು ವಾಹನ ಸಂಖ್ಯೆ | KA-04-1611 (PSV) |
| 2. | ವಾಹನದ ತಯಾರಕನ ಹೆಸರು | Telco |
| 3. | ವಾಹನದ ಮಾದರಿ | Saloon |
| 4. | ವಾಹನ ತಯಾರಿಕೆ ವರ್ಷ | 1991 |
| 5. | ಚಾಸಿಸ್ ಸಂಖ್ಯೆ | 344050 361250 |
| 6. | ಇಂಜಿನ್ ಸಂಖ್ಯೆ | 692D23373200 |
| 7. | ಅಶ್ವ ಶಕ್ತಿ | 31.5 HP |
| 8. | ಆಸನ ಸಾಮರ್ಥ್ಯ | 52+1=53 in all |
| 9. | ಮಾಲೀಕರ ಹೆಸರು ಮತ್ತು ವಿಳಾಸ | The General Manager, Bharat Electronics Ltd., Jalahalli Post, Bangalore-560 013. |

**ರುದ್ರಾನಾಯಕ್**
ಪ್ರಾದೇಶಿಕ ಸಾರಿಗೆ ಅಧಿಕಾರಿ,
ಬೆಂಗಳೂರು (ಉತ್ತರ).

ಪಿ.ಆರ್.493

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೀದರ ಜಿಲ್ಲೆ, ಬೀದರ**

**ವಿಷಯ:** ಸ್ಥಗಿತಗೊಂಡ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ, ಕಾಖೋರ್ ತಾಲ್ಲೂಕು ಬಸವಕಲ್ಯಾಣ ಜಿಲ್ಲಾ ಬೀದರ್ ಇದನ್ನು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಇವರ ಪತ್ರ ಸಂಖ್ಯೆ: ಸನಿಬಿ1/ ವಿ7/ ಸಮಾಪನೆ/ 2009–10, ದಿನಾಂಕ:30.112009.

**ಪೀಠಿಕೆ:**

ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ ಕಾಖೋರ್ ತಾಲ್ಲೂಕು ಬಸವಕಲ್ಯಾಣ ಜಿಲ್ಲಾ ಬೀದರವು ನೋಂದಣಿ ಸಂಖ್ಯೆ: ಎಸ್‌ಎಕ್ಸ್/ಬಿಡಿಆರ್/ಎಸ್4/1986–87 ದಿನಾಂಕ:14.06.1987 ರಂದು ನೋಂದಣಿಯಾಗಿದ್ದು, ಈ ಸಂಘ ಸುಮಾರು ವರ್ಷಗಳಿಂದ ಅದರ ಕಾರ್ಯಚಟುವಟಿಕೆಗಳನ್ನು ಸಂಪೂರ್ಣವಾಗಿ ಸ್ಥಗಿತಗೊಳಿಸಿದ್ದು, ಈ ಸಂಘವನ್ನು

ಪುನಃಶ್ಚೇತನಗೊಳಿಸುವುದಕ್ಕೆ ಯಾರಿಗೂ ಕೂಡಾ ಆಸಕ್ತಿ ಇಲ್ಲದಿರುವುದರಿಂದ ಈ ಸಂಘವನ್ನು ಸ್ಥಿತಿಯಲ್ಲಿಯೇ ಮುಂದುವರೆಯಲು ಅವಕಾಶ ಕೊಟ್ಟರೆ, ಪರಿಸ್ಥಿತಿ ಗಂಭೀರವಾಗುವುದೆಂದು ಹಾಗೂ ಈ ಸಂಘದಿಂದ ಸದಸ್ಯತ್ವರಿಗೂ ಕೂಡಾ ಪ್ರಯೋಜನವಿಲ್ಲವೆಂದು ಮನಗಂಡು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಅವರು ಉಲ್ಲೇಖಿತ ಪತ್ರದ ಮೂಲಕ ಸದರಿ ಸಂಘವನ್ನು ಸಮಾಪನೆಗೊಳಿಸುವುದಕ್ಕೆ ಪ್ರಸ್ತಾವ ಸಲ್ಲಿಸಿದ್ದನ್ನು ಪರಿಶೀಲಿಸಿ ಈ ಕೆಳಗಿನ ಆದೇಶ ಜಾರಿ ಮಾಡಿದೆ.

**ಆದೇಶ**

**ಸಂಖ್ಯೆ: ಸನಿಬಿ1/ವಿ–3/ಸಮಾಪನೆ/ಸಿಆರ್–/2009–10/1167, ದಿನಾಂಕ:30ನೇ ನವೆಂಬರ್, 2009**

ಈ ಆದೇಶದ ಪೀಠಿಕೆಯಲ್ಲಿ ಹೇಳಿರುವ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್‌ಎಂ/2000/ ದಿನಾಂಕ:21.11.2001ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತ ಚವ್ಹಾಣ ಗೋಪಾಲ ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ ಜಿಲ್ಲೆ ಬೀದರ ಆದ ನಾನು ಸ್ಥಗಿತಗೊಂಡ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ ಕಾಖೋರ್ ತಾಲ್ಲೂಕು ಬಸವಕಲ್ಯಾಣ ಜಿಲ್ಲಾ ಬೀದರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1)ರನ್ವಯ ಶ್ರೀಬಂಡೆಪ್ಪ ಮಾರ್ಗ ನಿರೀಕ್ಷಕರು, ಕರ್ನಾಟಕ ಹಾಲು ಉತ್ಪಾದಕರ ಸಂಘಗಳ ಒಕ್ಕೂಟ ಗುಲಬರ್ಗಾ, ಬೀದರ ಇವರನ್ನು ಸದರಿ ಸಂಘದ ಸಮಾಪನೆ ಅಧಿಕಾರಿ ಎಂದು ನೇಮಕ ಮಾಡಿ ಆದೇಶ ಹೊರಡಿಸಿರುತ್ತೇನೆ.

ಸಮಾಪನ ಅಧಿಕಾರಿಗಳು, ಸಹಕಾರ ಸಂಘಗಳ ಕಾಯ್ದೆ 1989ರ ಕಲಂ 74 ಹಾಗೂ ಅದರಡಿಯಲ್ಲಿ ನಿಯಮಗಳು 1960ರ ನಿಯಮ 33ರ ನಿರ್ದೇಶನಗಳ ಅನ್ವಯ ಸದರಿ ಸಂಘದ ಪ್ರಭಾರವನ್ನು ಪಡೆದು ಸಂಘದ ಆಸ್ತಿ– ಜವಾಬ್ದಾರಿ ವಿಲೇವಾರಿಗೊಳಿಸಲು ಆದ್ಯತೆ ಪಟ್ಟಿ ಸಲ್ಲಿಸಿ, ಈ ನ್ಯಾಯಾಲಯದ ಪೂರ್ವಾನುಮತಿಯೊಂದಿಗೆ ಆಸ್ತಿ ಮತ್ತು ಜವಾಬ್ದಾರಿಯನ್ನು ವಿಲೇವಾರಿಗೊಳಿಸಲು ಕ್ರಮವಿಟ್ಟು ನೊಂದಣಿ ರದ್ಧತಿಗಾಗಿ ಈ ಆದೇಶ ಹೊರಡಿಸಿದ 30 ದಿವಸಗಳೊಳಗಾಗಿ ಪ್ರಸ್ತಾವ ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮುದ್ರೆಯೊಂದಿಗೆ ಇಂದು 30ನೇ ನವೆಂಬರ್ 2009 ರಂದು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಉಪನಿಬಂಧಕರು,
ಬೀದರ ಜಿಲ್ಲೆ, ಬೀದರ.

ಪಿ.ಆರ್.42

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೀದರ ಜಿಲ್ಲೆ, ಬೀದರ**

**ವಿಷಯ:** ಸ್ಥಗಿತಗೊಂಡ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ, ಶರಣನಗರ ತಾಲ್ಲೂಕು ಬಸವಕಲ್ಯಾಣ ಜಿಲ್ಲಾ ಬೀದರ್ ಇದನ್ನು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಇವರ ಪತ್ರ ಸಂಖ್ಯೆ: ಸನಿಬಿ1/ ವಿ7/ ಸಮಾಪನೆ/ 2009–10, ದಿನಾಂಕ:30.11.2009.

**ಪೀಠಿಕೆ:**

ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ ಶರಣನಗರ ತಾಲ್ಲೂಕು ಬಸವಕಲ್ಯಾಣ ಜಿಲ್ಲಾ ಬೀದರವು ನೋಂದಣಿ ಸಂಖ್ಯೆ: ಆರ್‌ಎಸ್‌ಆರ್/ಎಆರ್‌ಐ/787/1978–79 ದಿನಾಂಕ:24.09.1978 ರಂದು ನೋಂದಣಿಯಾಗಿದ್ದು, ಈ ಸಂಘ ಸುಮಾರು ವರ್ಷಗಳಿಂದ ಅದರ ಕಾರ್ಯಚಟುವಟಿಕೆಗಳನ್ನು ಸಂಪೂರ್ಣವಾಗಿ ಸ್ಥಗಿತಗೊಳಿಸಿದ್ದು, ಈ ಸಂಘವನ್ನು ಪುನಃಶ್ಚೇತನಗೊಳಿಸುವುದಕ್ಕೆ ಯಾರಿಗೂ ಕೂಡಾ ಆಸಕ್ತಿ ಇಲ್ಲದಿರುವುದರಿಂದ ಈ ಸಂಘವನ್ನು ಸ್ಥಿತಿಯಲ್ಲಿಯೇ ಮುಂದುವರೆಯಲು ಅವಕಾಶ ಕೊಟ್ಟರೆ, ಪರಿಸ್ಥಿತಿ ಗಂಭೀರವಾಗುವುದೆಂದು ಹಾಗೂ ಈ ಸಂಘದಿಂದ ಸದಸ್ಯತ್ವರಿಗೂ ಕೂಡಾ ಪ್ರಯೋಜನವಿಲ್ಲವೆಂದು ಮನಗಂಡು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಅವರು ಉಲ್ಲೇಖಿತ ಪತ್ರದ ಮೂಲಕ ಸದರಿ ಸಂಘವನ್ನು ಸಮಾಪನೆಗೊಳಿಸುವುದಕ್ಕೆ ಪ್ರಸ್ತಾವ ಸಲ್ಲಿಸಿದ್ದನ್ನು ಪರಿಶೀಲಿಸಿ ಈ ಕೆಳಗಿನ ಆದೇಶ ಜಾರಿ ಮಾಡಿದೆ.

**ಆದೇಶ**

**ಸಂಖ್ಯೆ: ಸನಿಬಿ1/ವಿ–3/ಸಮಾಪನೆ/ಸಿಆರ್–/2009–10/1163, ದಿನಾಂಕ:30ನೇ ನವೆಂಬರ್, 2009**

ಈ ಆದೇಶದ ಪೀಠಿಕೆಯಲ್ಲಿ ಹೇಳಿರುವ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/2000/ ದಿನಾಂಕ:21.11.2001ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತ ಚವ್ಹಾಣ ಗೋಪಾಲ ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ ಜಿಲ್ಲೆ ಬೀದರ ಆದ ನಾನು ಸ್ಥಗಿತಗೊಂಡ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ ಶರಣನಗರ ತಾಲ್ಲೂಕು ಬಸವಕಲ್ಯಾಣ ಜಿಲ್ಲಾ ಬೀದರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1)ರನ್ವಯ ಶ್ರೀಬಂಡೆಪ್ಪ ಮಾರ್ಗ ನಿರೀಕ್ಷಕರು, ಕರ್ನಾಟಕ ಹಾಲು ಉತ್ಪಾದಕರ ಸಂಘಗಳ ಒಕ್ಕೂಟ ಗುಲಬರ್ಗಾ, ಬೀದರ ಇವರನ್ನು ಸದರಿ ಸಂಘದ ಸಮಾಪನೆ ಅಧಿಕಾರಿ ಎಂದು ನೇಮಕ ಮಾಡಿ ಆದೇಶ ಹೊರಡಿಸಿರುತ್ತೇನೆ.

ಸಮಾಪನ ಅಧಿಕಾರಿಗಳು, ಸಹಕಾರ ಸಂಘಗಳ ಕಾಯ್ದೆ 1989ರ ಕಲಂ 74 ಹಾಗೂ ಅದರಡಿಯಲ್ಲಿ ನಿಯಮಗಳು 1960ರ ನಿಯಮ 33ರ ನಿರ್ದೇಶನಗಳ ಅನ್ವಯ ಸದರಿ ಸಂಘದ ಪ್ರಭಾರವನ್ನು ಪಡೆದು ಸಂಘದ ಆಸ್ತಿ– ಜವಾಬ್ದಾರಿ ವಿಲೇವಾರಿಗೊಳಿಸಲು ಆದ್ಯತೆ ಪಟ್ಟಿ ಸಲ್ಲಿಸಿ, ಈ ನ್ಯಾಯಾಲಯದ ಪೂರ್ವಾನುಮತಿಯೊಂದಿಗೆ ಆಸ್ತಿ ಮತ್ತು ಜವಾಬ್ದಾರಿಯನ್ನು ವಿಲೇವಾರಿಗೊಳಿಸಲು ಕ್ರಮವಿಟ್ಟು ನೊಂದಣಿ ರದ್ಧತಿಗಾಗಿ ಈ ಆದೇಶ ಹೊರಡಿಸಿದ 30 ದಿವಸಗಳೊಳಗಾಗಿ ಪ್ರಸ್ತಾವ ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮುದ್ರೆಯೊಂದಿಗೆ ಇಂದು 30ನೇ ನವೆಂಬರ್ 2009 ರಂದು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಉಪನಿಬಂಧಕರು,
ಬೀದರ ಜಿಲ್ಲೆ, ಬೀದರ.

ಪಿ.ಆರ್.43

**ವಾಣಿಜ್ಯ ತೆರಿಗೆ ಇಲಾಖೆ**

**ವಾಣಿಜ್ಯ ತೆರಿಗೆ ಆಯುಕ್ತರ ಕಛೇರಿ, ವಾಣಿಜ್ಯ ತೆರಿಗೆ ಕಾರ್ಯಾಲಯ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: ಕೆಎಸ್ಎ/ಸಿಆರ್.155/2007–08, ದಿನಾಂಕ:12ನೇ ಜನವರಿ, 2010**

1899ರ ಸಾಮಾನ್ಯ ಖಂಡಗಳ ಅಧಿನಿಯಮ (1899ರ ಕರ್ನಾಟಕ ಅಧಿನಿಯಮ ಸಂಖ್ಯೆ 3) ದ ಪ್ರಕರಣ 21ರೊಂದಿಗೆ ಓದುತ್ತಾ 2005ರ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ನಿಯಮಾವಳಿಯ ನಿಯಮ 33ರ ಉಪ–ನಿಯಮ (3)ರ ಕಂಡಿಕೆ (ಬಿ) ನಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ದಿನಾಂಕ:08.06.2009ರ ಅಧಿಸೂಚನೆ ಸಂಖ್ಯೆ: ಕೆಎಸ್ಎ.ಸಿಆರ್.155/2007–08 ಯನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಈ ಮುಂದಿನಂತೆ ತಿದ್ದುಪಡಿ ಮಾಡಲಾಗಿದೆ.

ಹೇಳಿದ ಅಧಿಸೂಚನೆಯಲ್ಲಿ, ಕ್ರಮಸಂಖ್ಯೆ 1ರ ವಿಷಯದಲ್ಲಿ "ನೋಂದಾಯಿತನಾಗಿ" ಎಂಬ ಪದದ ನಂತರ "ಹೂಡುವಳಿ ತೆರಿಗೆ ಕಡಿತ ಕೇಳುವ ಮತ್ತು" ಎಂಬ ಪದಗಳನ್ನು ಸೇರಿಸತಕ್ಕದ್ದು.

**ಪ್ರದೀಪ್ ಸಿಂಗ್ ಖರೋಲ**
ವಾಣಿಜ್ಯ ತೆರಿಗೆಗಳ ಆಯುಕ್ತರು (ಕರ್ನಾಟಕ).

**DEPARTMENT OF COMMERCIAL TAXES**

**Office of the Commissioner of Commercial Taxes (K), Gandhinagar, Bengaluru-560 009**

**NOTIFICATION**

**No.KSA.CR.155/07-08, Dated:5th January, 2010**

In exercise of the powers conferred under clause (b) of sub-rule (3) of Rule 33 of Karnataka Value Added Tax Rules, 2005 read with Section 21 of the Karnataka General Clauses Act, 1899 (Karnataka Act, 3 of 1899), the Notification No.KSA.CR.155/2007-08, Dated:8th June, 2009, is hereby amended with immediate effect, as follows:

In the said notification, in item (1), after the word and figures "Act, 2003" the words "who is claiming deduction of input tax and" shall be inserted.

**PRADEEP SINGH KHAROLA**
Commissioner of Commercial Taxes (K), Bengaluru.

PR-148

## ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ

**ಸಂಖ್ಯೆ: ಡಿಟಿಸಿಆರ್:387/2008–09, ದಿನಾಂಕ:28ನೇ ಮೇ, 2009**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ದ** | **ಪ್ರತಿವಾದಿ/ ಆರೋಪಿ** |
|---|---|---|
| ಆರಕ್ಷಕ ನಿರೀಕ್ಷಕರು,<br>ಹೆಚ್.ಡಿ. ಕೋಟೆ ಪೊಲೀಸ್ ಠಾಣೆ,<br>ಮೈಸೂರು. | | ಲೂಯಿಸ್ ಬಿನ್ ಫೆಲಿಕ್ಸ್ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:16.10.2008ರಂದು ಸಂಜೆ 4.00 ರ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ಹೆಚ್.ಡಿ. ಕೋಟೆ ಪೊಲೀಸ್ ಠಾಣೆ ಇವರು ಹೆಚ್.ಡಿ. ಕೋಟೆ ತಾಲ್ಲೂಕು, ಕಟ್ಟೆಮ್ಮನಹಳ್ಳಿ ಕ್ರಾಸ್‌ನಲ್ಲಿ ಒಬ್ಬ ವ್ಯಕ್ತಿಯು ವಾಹನ ಚಲಿಸಿಕೊಂಡು ಅದರಲ್ಲಿ 8.640 ಲೀ. ಮದ್ಯವನ್ನು ಯಾವುದೇ ಪರವಾನಗಿ ಇಲ್ಲದೇ ಹೊಂದಿದ್ದ ಆರೋಪಕ್ಕಾಗಿ ಕೆಎ–45/ಹೆಚ್–3363 ನೋಂದಣಿ ಸಂಖ್ಯೆಯ ಬಜಾಜ್ ಡಿಸ್ಕವರ್ ವಾಹನವನ್ನು ಜಪ್ತುಗೊಳಿಸಿ, ಠಾಣಾ ಮೊಕದ್ದಮೆ ಸಂಖ್ಯೆ:369/2008ರಲ್ಲಿ ಕರ್ನಾಟಕ ಅಬಕಾರಿ ಕಾಯ್ದೆ 11, 13(ಎ), ಕಲಂ 32ರ ಪ್ರಕಾರ ಮೊಕದ್ದಮೆಯನ್ನು ದಾಖಲಿಸಿ, ಸಂಬಂಧಪಟ್ಟ ವಾಹನ ಮತ್ತು ಮಾದಕ ದ್ರವ್ಯಗಳನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ಕೋರಿರುತ್ತಾರೆ. ಅಂತೆಯೇ ದಿನಾಂಕ:31.01.2009ರಂದು ಹೆಚ್.ಡಿ. ಕೋಟೆ ವಲಯದ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸುವಂತೆ ಈ ಪ್ರಾಧಿಕಾರದಿಂದ ಅನುಮತಿ ನೀಡಲಾಗಿದೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯ ಪ್ರತಿಯನ್ನು ಕೋರಿ ಹುಣಸೂರು ತಾಲ್ಲೂಕಿನ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಈ ಪ್ರಾಧಿಕಾರದಿಂದ ದಿನಾಂಕ:17.02.2008ರಂದು ಪತ್ರ ಬರೆಯಲಾಗಿರುತ್ತದೆ. ಅಂತೆಯೇ ಬಿ ವಹಿಯ ಪ್ರತಿಯನ್ನು ಪಡೆದು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಇದನ್ನು ಪರಿಶೀಲಿಸಲಾಗಿ ಅಂತೋಣಿರಾಜ್ ಬಿನ್ ಪುಷ್ಪರಾಜ್, 1ನೇ ಮೈನ್ ರೋಡ್, ನಾಗನಹಳ್ಳಿ, ಹೆಚ್.ಡಿ. ಕೋಟೆ ತಾಲ್ಲೂಕು, ಇವರ ಒಡೆತನದಲ್ಲಿರುವುದು ಬಿ ವಹಿಯಿಂದ ದೃಢಪಟ್ಟಿರುತ್ತದೆ. ಸದರಿ ವಾಹನ ಮಾಲೀಕರಿಗೆ ದಿನಾಂಕ:23.03.2009ರಂದು ಈ ಪ್ರಾಧಿಕಾರದಿಂದ ಕಲಂ 43(ಬಿ)ರ ಅಡಿಯಲ್ಲಿ ನೀಡಿರುವ ಕಾರಣ ಕೇಳಿ ನೋಟೀಸನ್ನು ವಾಹನ ಮಾಲೀಕರಿಗೆ ದಿನಾಂಕ:04.05.2009ರಂದು ಹೆಚ್.ಡಿ. ಕೋಟೆ ವಲಯದ ಅಬಕಾರಿ ನಿರೀಕ್ಷಕರ ಮತ್ತು ಅಂಚೆಯ ಮೂಲಕ ಜಾರಿಯಾಗಿ, ದಿನಾಂಕ:06.05.2009ರಂದು ಸ್ವೀಕೃತಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಾಹನದ ಮಾಲೀಕರಾದ ಶ್ರೀ ಅಂತೋಣಿ ರಾಜ್ ಬಿನ್ ಪುಷ್ಪರಾಜ್ ಇವರು ದಿನಾಂಕ:07.05.2009ರಂದು ಈ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಿ, ಸದರಿಯವರ ಹೆಸರಿನಲ್ಲಿರುವ ವಾಹನವನ್ನು ಇಲಾಖೆಯ ಮುಖಾಂತರ ಇತ್ಯರ್ಥಪಡಿಸಬೇಕೆಂದು ಕೋರಿರುತ್ತಾರೆ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:16.10.2008ರಂದು ಹೆಚ್.ಡಿ. ಕೋಟೆ ತಾಲ್ಲೂಕು, ಕಟ್ಟೆಮ್ಮನಹಳ್ಳಿ ಕ್ರಾಸ್ ಒಬ್ಬ ವ್ಯಕ್ತಿ 8.640 ಲೀ. ಮದ್ಯವನ್ನು ಯಾವುದೇ ಪರವಾನಗಿ ಇಲ್ಲದೇ ಕೆಎ–45/ಹೆಚ್–3363 ನೋಂದಣಿ ಸಂಖ್ಯೆಯ ಬಜಾಜ್ ಡಿಸ್ಕವರ್ ವಾಹನದಲ್ಲಿ ಸಾಗಾಣಿಕೆ ಮಾಡುತ್ತಿದ್ದು ಕಂಡು ಬಂದಿರುತ್ತದೆ. ಈ ಸಂದರ್ಭದಲ್ಲಿ ಲೂಯಿಸ್ ಬಿನ್ ಫೆಲಿಕ್ಸ್ ಎಂಬ ಆರೋಪಿಯನ್ನು ದಸ್ತಗಿರಿ ಮಾಡಲಾಗಿರುತ್ತದೆ. ಅಂತೋಣಿ ರಾಜ್ ರವರು ಪ್ರಕರಣವನ್ನು ಇಲಾಖಾ ಮುಖಾಂತರ ಇತ್ಯರ್ಥಪಡಿಸಿಕೊಡಬೇಕೆಂದು ಕೋರಿರುತ್ತಾರೆ. ಈ ಪ್ರಕರಣವು ಕಲಂ 32ರ ಅಡಿಯಲ್ಲಿ ಮೊಕದ್ದಮೆ ದಾಖಲಾಗಿದ್ದು, ಇಲಾಖಾ ಮುಖಾಂತರ ತೀರ್ಮಾನಿಸಲು ಕಾನೂನಿನ ಅಡಿಯಲ್ಲಿ ಅವಕಾಶ ಇರುವುದಿಲ್ಲ. ಸದರಿ ವಾಹನಕ್ಕೆ ಸಂಬಂಧಪಟ್ಟಂತೆ ವಾಹನ ಬಿಡುಗಡೆಗಾಗಿ ಆರೋಪಿಯಾಗಲಿ/ ಮಾಲೀಕರಾಗಿ ತಮ್ಮ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ನಿಲುವು ಏನೆಂಬುದನ್ನು ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಸುಮಾರು (6) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ

ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:387/2008–09, ದಿನಾಂಕ:28ನೇ ಮೇ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)ರ ಅಡಿಯಲ್ಲಿ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ಹೆಚ್.ಡಿ.ಕೋಟೆ ಪೊಲೀಸ್ ಠಾಣೆ, ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:369/2008, ದಿನಾಂಕ:16.10.2008ರಂದು ವಶಪಡಿಸಿಕೊಂಡ ಕೆಎ–45/ಹೆಚ್–3363 ನೋಂದಣಿ ಸಂಖ್ಯೆಯ ಬಜಾಜ್ ಡಿಸ್ಕವರ್ ವಾಹನ ಮತ್ತು 8.640 ಲೀ. ಮದ್ಯವನ್ನು (ಮಾದರಿಯನ್ನು ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ ದಿನಾಂಕ:2009ನೇ ಇಸವಿ ಮೇ ತಿಂಗಳ 28ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್–599

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:386/2007–08, ದಿನಾಂಕ:4ನೇ ಜೂನ್, 2009**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
| --- | --- | --- |
| ಅಬಕಾರಿ ನಿರೀಕ್ಷಕರು,<br>ನಂಜನಗೂಡು ವಲಯ, ನಂಜನಗೂಡು. | | ಆರೋಪಿ ಪರಾರಿಯಾಗಿರುತ್ತಾನೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:20.03.2008ರಂದು ರಾತ್ರಿ 11–30 ಗಂಟೆಯ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ನಂಜನಗೂಡು ವಲಯ, ನಂಜನಗೂಡು ಇವರು ನಂಜನಗೂಡು ತಾಲ್ಲೂಕು, ಹುಲ್ಲಹಳ್ಳಿ ಹೋಬಳಿ, ಶಿರಮ್ಮಳ್ಳಿ–ಹುಲ್ಲಹಳ್ಳಿ ಅಡ್ಡ ರಸ್ತೆಯ ತೋಡುಗಾಲುವೆ ಸೇತುವೆಯ ಹತ್ತಿರ ಸಿಎಎಕ್ಸ್–6025 ನೋಂದಣಿ ಸಂಖ್ಯೆಯ ಮಾರುತಿ–800 ವಾಹನದಲ್ಲಿ ಅಕ್ರಮವಾಗಿ 43.200 ಲೀ. ನಕಲಿಯಂತೆ ಕಾಣುವ ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ನಕಲಿ ಮದ್ಯವನ್ನು ಜಪ್ತುಮಾಡಿ, ಪ್ರಕರಣ ಸಂಖ್ಯೆ:15/2007–08ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965 ರ ನಿಯಮ 11, 14ರ ರೀತ್ಯಾ ಅಪರಾಧವಾಗಿದ್ದು, ಇದೇ ಕಾಯಿದೆ ನಿಯಮ 32, 38(ಎ) ಮತ್ತು 43ರ ಪ್ರಕಾರ ಶಿಕ್ಷಾರ್ಹವಾದ್ದರಿಂದ ಆರೋಪಿ ಪರಾರಿಯಾಗಿರುವುದಾಗಿ ಮೊಕದ್ದಮೆ ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಮುಂದಿನ ಕ್ರಮಕ್ಕಾಗಿ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯನ್ನು ಕೋರಿ ಬೆಂಗಳೂರಿನ 5 ವಲಯಗಳ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಈ ಪ್ರಾಧಿಕಾರದಿಂದ ದಿನಾಂಕ:21.07.2008 ರಂದು ಪತ್ರ ಬರೆಯಲಾಗಿದ್ದು, ಇದಕ್ಕೆ ಯಾವುದೇ ಪ್ರತಿಕ್ರಿಯೆ ದೊರೆಯದ ಕಾರಣ ದಿನಾಂಕ:05.11.2008 ರಂದು ದಕ್ಷಿಣ ಸಾರಿಗೆ ಅಧಿಕಾರಿಗಳಿಗೆ ಮತ್ತೊಮ್ಮೆ ಪತ್ರ ವ್ಯವಹಾರ ನಡೆಸಲಾಗಿರುತ್ತದೆ. ನಂಜನಗೂಡು ವಲಯದ ಅಬಕಾರಿ ನಿರೀಕ್ಷಕರು, ಸದರಿ ವಾಹನದ 'ಬಿ' ವಹಿಯ ಪ್ರತಿಯನ್ನು ಪಡೆದು, ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಅದನ್ನು ಪರಿಶೀಲಿಸಲಾಗಿ ಶಕೀಲ್ ಅಹಮ್ಮದ್ ಬಿನ್ ಕ್ಯೂರಾಭಿ, ನಂ.15, 9ನೇ ಕ್ರಾಸ್, ನೌಸಯ್ ನಗರ ಪೂರ್ವ, ಬೆಂಗಳೂರು ಇವರ ಒಡೆತನದಲ್ಲಿದ್ದು, ಸದರಿ ವಾಹನ ಮಾಲೀಕರಿಗೆ ಈ ಪ್ರಾಧಿಕಾರದಿಂದ

ದಿನಾಂಕ:29.11.2008 ರಂದು ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸ್‌ನ್ನು ನೊಂದಣಿ ಅಂಚೆ ಮೂಲಕ ಕಳುಹಿಸಲಾಗಿದ್ದು, ಸದರಿ ನೋಟೀಸ್ ವಿಳಾಸದಲ್ಲಿಲ್ಲವೆಂಬ ಷರಾದೊಂದಿಗೆ ಅಂಚೆ ಇಲಾಖೆಯವರು ಈ ಪ್ರಾಧಿಕಾರಕ್ಕೆ ಹಿಂದಿರುಗಿಸಿರುತ್ತಾರೆ. ಹಾಗೆಯೇ ಬೆಂಗಳೂರು ಜಯನಗರ, ದಕ್ಷಿಣ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು 'ಬಿ' ವಹಿಯ ಪ್ರತಿಯನ್ನು ಕಳುಹಿಸಿರುತ್ತಾರೆ. ಇದನ್ನೂ ಸಹ ನೋಡಲಾಗಿ, ಆರ್.ಸೀತಾರಾಮನ್ ಮತ್ತು ಎಸ್. ಬಾಲಸುಬ್ರಮಣ್ಯಂ ಎಂಬುವವರಿಗೆ ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ನೀಡಲಾಗಿತ್ತು. ಅವುಗಳು ಸಹ ಬಾಗಿಲು ಮುಚ್ಚಿರುವುದಾಗಿ ಮತ್ತು ವಿಳಾಸದಲ್ಲಿ ಇಲ್ಲವೆಂಬ ಷರಾದೊಂದಿಗೆ ಅಂಚೆ ಇಲಾಖೆಯವರು ಸದರಿ ನೋಟೀಸ್‌ನ್ನು ಈ ಪ್ರಾಧಿಕಾರಕ್ಕೆ ಹಿಂದಿರುಗಿಸಿರುತ್ತಾರೆ.

ಕಡತ ಪರಿಶೀಲಿಸಲಾಯಿತು. ದಿನಾಂಕ:20.03.2008ರಂದು ನಂಜನಗೂಡು ತಾಲ್ಲೂಕು, ಹುಲ್ಲಹಳ್ಳಿ ಹೋಬಳಿ, ಶಿರ್ಮಳ್ಳಿ–ಹುಲ್ಲಹಳ್ಳಿ ಅಡ್ಡ ರಸ್ತೆಯ ತೋಡುಗಾಲುವೆ ಸೇತುವೆಯ ಹತ್ತಿರ ಸಿಎಎಕ್ಸ್–6025 ನೋಂದಣಿ ಸಂಖ್ಯೆಯ ಮಾರುತಿ–800 ವಾಹನದಲ್ಲಿ ಅಕ್ರಮವಾಗಿ 43.200 ಲೀ. ನಕಲಿಯಂತೆ ಕಾಣುವ ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿ ತಲೆ ಮರೆಸಿಕೊಂಡಿರುತ್ತಾನೆ. 'ಬಿ' ವಹಿ ರನ್ವಯ ಸದರಿ ವಾಹನ ಮಾಲೀಕರಾದ ಶಕೀಲ್ ಅಹಮ್ಮದ್ ಬಿನ್ ಕ್ಯೂರಾಭಿ, ನಂ.15, 9ನೇ ಕ್ರಾಸ್, ನೌಸರ್ಯ್ ನಗರ, ಪೂರ್ವ ಬೆಂಗಳೂರು, ಆರ್. ಸೀತಾರಾಮನ್, ಎಸ್. ಬಾಲಸುಬ್ರಮಣ್ಯಂ ಇವರುಗಳಿಗೆ ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸ್‌ನ್ನು ಜಾರಿಗೊಳಿಸಲಾಗಿದ್ದು, ವಿಳಾಸದಲ್ಲಿಲ್ಲವೆಂಬ ಷರಾದೊಂದಿಗೆ ಅಂಚೆ ಇಲಾಖೆಯವರು ನೋಟೀಸ್‌ಗಳನ್ನು ಈ ಪ್ರಾಧಿಕಾರಕ್ಕೆ ಹಿಂದಿರುಗಿಸಿರುತ್ತಾರೆ. ಸದರಿ ವಾಹನಕ್ಕೆ ಸಂಬಂಧಪಟ್ಟ ಆರೋಪಿಯಾಗಲೀ/ ವಾಹನ ಮಾಲೀಕರಾಗಲೀ ಈ ಪ್ರಾಧಿಕಾರದ ಮುಂದೆ ತಮ್ಮ ನಿಲುವು ಏನೆಂಬುದನ್ನು ಮತ್ತು ತಮ್ಮ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ. ಅಕ್ರಮವಾಗಿ ನಕಲಿ ಮದ್ಯವನ್ನು ತಯಾರಿಸಿ, ಸಾಗಾಣಿಕೆ, ಮಾರಾಟ ಇತ್ಯಾದಿ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡು, ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟುಮಾಡುವುದಲ್ಲದೇ, ಸರ್ಕಾರದ ಉದ್ದೇಶವನ್ನು ವಿಫಲಗೊಳಿಸುವಲ್ಲಿ ಕಾರ್ಯಪ್ರವೃತ್ತರಾಗಿರುವುದು ಕಂಡುಬಂದಿರುತ್ತದೆ.

ಪ್ರಥಮ ಮಾಹಿತಿ ವರದಿಯಲ್ಲಿ ಆರೋಪಿಯು ತಲೆ ಮರೆಸಿಕೊಂಡಿರುವುದಾಗಿ ಮೊಕದ್ದಮೆಯನ್ನು ದಾಖಲಿಸಿ, ಸುಮಾರು (14) ತಿಂಗಳಿಗೂ ಹೆಚ್ಚು ಕಾಲ ಕಳೆದಿರುತ್ತದೆ. ಇಂತಹ ಪ್ರಕರಣಗಳಲ್ಲಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಮೊಕದ್ದಮೆ ದಾಖಲಾದ ದಿನದಿಂದ ಒಂದು ತಿಂಗಳೊಳಗಾಗಿ ವಾಹನ ಮತ್ತು ಮಾದಕ ದ್ರವ್ಯಗಳು ತನ್ನದೆಂದು ಮಾಲೀಕತ್ವ ನಿರೂಪಿಸಲು ಮುಂದೆ ಬಾರದಿದ್ದ ಪಕ್ಷದಲ್ಲಿ ಅಂತಹ ವಾಹನ ಮತ್ತು ಮಾದಕ ದ್ರವ್ಯಗಳನ್ನು ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (14) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:386/2007–08, ದಿನಾಂಕ:4ನೇ ಜೂನ್, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)ರ ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬ್ಕಾರಿ ನಿರೀಕ್ಷಕರು, ನಂಜನಗೂಡು ವಲಯ, ನಂಜನಗೂಡು ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:15/2007–08, ದಿನಾಂಕ:20.03.2008ರಂದು ವಶಪಡಿಸಿಕೊಂಡ ಸಿಎಎಕ್ಸ್–6025 ನೋಂದಣಿ ಸಂಖ್ಯೆಯ ಮಾರುತಿ–800 ವಾಹನ ಮತ್ತು 43.200 ಲೀ. ನಕಲಿ ಮದ್ಯವನ್ನು (ಮಾದರಿಯನ್ನು ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಜೂನ್ ತಿಂಗಳ 4ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್–609

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:208/2007–08, ದಿನಾಂಕ:26ನೇ ಫೆಬ್ರವರಿ, 2009**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಪಿ. ರಮೇಶ್,<br>ಅಬಕಾರಿ ಉಪ ನಿರೀಕ್ಷಕರು–2<br>(ಜಾರಿ ಮತ್ತು ತನಿಖೆ)<br>ಟಿ.ನರಸೀಪುರ ವಲಯ. | | ಆರೋಪಿಗಳನ್ನು ಪತ್ತೆ ಹಚ್ಚಬೇಕಾಗಿರುತ್ತದೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:19.10.2007ರಂದು ಬೆಳಗಿನ ಜಾವ 4–30 ಗಂಟೆಯ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು–2, (ಜಾರಿ ಮತ್ತು ತನಿಖೆ), ಟಿ.ನರಸೀಪುರ ಇವರು ಟಿ.ನರಸೀಪುರ ತಾಲ್ಲೂಕು, ಬನ್ನೂರು ಹೋಬಳಿ, ದೊಡ್ಡಮುಲಗೂಡು, ಬನ್ನೂರಿಗೆ ಹೋಗುವ ರಸ್ತೆ, ಕೆರೆ ಏರಿಯಾ ಹತ್ತಿರ ಮಾರುತಿ–800 ಕಾರ್ ಸಂಖ್ಯೆ: ಕೆಎ–04–ಎಂಎ–601 ರಲ್ಲಿ ಅಕ್ರಮವಾಗಿ 86.400 ಲೀ. ನಕಲಿ ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದ್ದಕ್ಕಾಗಿ ವಾಹನ ಮತ್ತು ನಕಲಿ ಮದ್ಯವನ್ನು ವಶಪಡಿಸಿಕೊಂಡು, ಪ್ರ.ಮಾ.ವ. ಸಂಖ್ಯೆ:06/07–08ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11 ಮತ್ತು 14ರ ಪ್ರಕಾರ ಅಪರಾಧವಾಗಿದ್ದು, ಕಲಂ 32 ಮತ್ತು 38(ಎ) ರ ಪ್ರಕಾರ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆಯನ್ನು ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಾಹನದ ಮಾಲೀಕತ್ವದ ವಿವರವನ್ನು ಕೋರಿ, ಬೆಂಗಳೂರು ಯಶವಂತಪುರ ಉತ್ತರ ವಲಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:14.11.2007ರಂದು ಪತ್ರ ಬರೆಯಲಾಗಿದ್ದು, ಇದಕ್ಕೆ ಯಾವುದೇ ಪ್ರತಿಕ್ರಿಯೆ ದೊರೆಯದ ಕಾರಣ, ದಿನಾಂಕ:17.01.2008ರಂದು ಮತ್ತೊಂದು ಪತ್ರ ವ್ಯವಹಾರ ನಡೆಸಲಾಗಿರುತ್ತದೆ. ಈ ಪ್ರಕರಣದಲ್ಲಿ ಜಪ್ತುಗೊಳಿಸಲಾದ 86.400 ಲೀ. ನಕಲಿ ಮದ್ಯವನ್ನು ಕರ್ನಾಟಕ ಅಬಕಾರಿ ಕಾಯ್ದೆ ರೀತ್ಯಾ ದಿನಾಂಕ:28.01.2008 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ಹೊರಡಿಸಲಾಗಿದೆ.

ಬೆಂಗಳೂರು ಉತ್ತರ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಬಿ ವಹಿಯನ್ನು ಕಳುಹಿಸಿರುತ್ತಾರೆ. ಸದರಿ ವಹಿಯನ್ನು ಪರಿಶೀಲಿಸಲಾಗಿ, ದಿನಾಂಕ:08.06.2007 ರಂದು ವಾಹನದ ತೀರುವಳಿ ಪತ್ರವನ್ನು ಮಂಡ್ಯ ಜಿಲ್ಲೆಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ವರ್ಗಾಯಿಸಿರುವುದರಿಂದ ದಿನಾಂಕ:29.01.2008 ಮತ್ತು 19.07.2008ರಂದು ಮಂಡ್ಯ ಜಿಲ್ಲೆಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಬಿ ವಹಿಯನ್ನು ಕಳುಹಿಸುವಂತೆ ಪತ್ರ ವ್ಯವಹಾರ ನಡೆಸಲಾಗಿರುತ್ತದೆ. ಮಂಡ್ಯ ಜಿಲ್ಲೆಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ವಾಹನವು ಈ ವಲಯಕ್ಕೆ ಸೇರ್ಪಡೆಯಾಗಿರುವುದಿಲ್ಲವೆಂದು ತಮ್ಮ ಪತ್ರ ದಿನಾಂಕ:14.03.2008ರಲ್ಲಿ ತಿಳಿಸಿರುತ್ತಾರೆ. ಹೇಗೆಯೇ ಆಗಲಿ, ಬೆಂಗಳೂರಿನ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನೀಡಿರುವ ಬಿ ವಹಿಯನ್ವಯ ಹಾಲಿ ಲಭ್ಯವಿದ್ದ ವಾಹನ ಮಾಲೀಕರಾದ ಶ್ರೀ ಆರ್.ಕೆ. ಜಯಶಂಕರ್ ಬಿನ್ ಆರ್.ಕೆ. ಕುಟ್ಟನ್, ನಂ.11, 2ನೇ ಕ್ರಾಸ್, ಹೆಬ್ಬಾಳ್–ಕೆಂಪಾಪುರ, 1ನೇ ಮೈನ್, ಬೆಂಗಳೂರು ಇವರಿಗೆ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಬಿ) ರ ಅಡಿಯಲ್ಲಿ ಕಾರಣ ಕೇಳುವ ನೋಟೀಸನ್ನು

ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿದ್ದು, ವಿಳಾಸದಲ್ಲಿ ಇಲ್ಲವೆಂಬ ಷರಾದೊಂದಿಗೆ ಅಂಚೆ ಇಲಾಖೆಯವರು ಈ ಪ್ರಾಧಿಕಾರಕ್ಕೆ ಹಿಂದಿರುಗಿಸಿರುತ್ತಾರೆ.

ಕಡತ ಪರಿಶೀಲಿಸಲಾಯಿತು. ಕೆಳಕಂಡ ದಾಖಲಾತಿಗಳು ಕಂಡುಬಂದಿರುತ್ತವೆ.

1. ಮಹಜರ್ ಕ್ರಮ
2. ಮಾದರಿ ಮೊಹರಿನ ನಕಲು
3. ಪ್ರಥಮ ಮಾಹಿತಿ ವರದಿ
4. ಸ್ವತ್ತಿನ ಪಟ್ಟಿ
5. ರಾಸಾಯನಿಕ ತಜ್ಞರ ವರದಿ.

ಮೇಲ್ಕಂಡ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:19.10.2007ರಂದು ಟಿ.ನರಸೀಪುರ ತಾಲ್ಲೂಕು, ಬನ್ನೂರು ಹೋಬಳಿ, ದೊಡ್ಡಮುಲಗೂಡು, ಬನ್ನೂರಿಗೆ ಹೋಗುವ ರಸ್ತೆ, ಕೆರೆ ಏರಿಯಾ ಹತ್ತಿರ ಅಂಬಾಸಿಡರ್ ಕಾರ್ ಸಂಖ್ಯೆ: ಕೆಎ–04/ಎಂಎ–601 ರಲ್ಲಿ ಅಕ್ರಮವಾಗಿ 86.400 ಲೀ. ನಕಲಿ ಮದ್ಯವನ್ನು ಯಾವುದೇ ರಹದಾರಿಯಿಲ್ಲದೆ ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿಗಳು ತಲೆ ಮರೆಸಿಕೊಂಡಿರುತ್ತಾರೆ. ಅಲ್ಲದೇ ಬಿ ವಹಿ ರನ್ವಯ ಶ್ರೀ ಆರ್.ಕೆ. ಜಯಶಂಕರ್ ಬಿನ್ ಆರ್.ಕೆ. ಕುಟ್ಟನ್, ನಂ.11, 2ನೇ ಕ್ರಾಸ್, ಹೆಬ್ಬಾಳ್–ಕೆಂಪಾಪುರ, 1ನೇ ಮೈನ್, ಬೆಂಗಳೂರು ಇವರ ಒಡೆತನದಲ್ಲಿದ್ದು, ವಾಹನ ಬಿಡುಗಡೆಗಾಗಿ ಆರೋಪಿ/ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆದಿರುವುದಿಲ್ಲ ಹಾಗೂ ಅಬಕಾರಿ ಕಾಯ್ದೆ ಕಲಂ 42ರ ಅಡಿಯಲ್ಲಿ ಪ್ರಸ್ತಾವನೆ ಮತ್ತು 43(ಬಿ) (1)(2) ವಾಹನ ಮಾಲೀಕರ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಅವರು ಪ್ರಾಧಿಕಾರದ ಮುಂದೆ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಜಪ್ತು ಪಡಿಸಲಾದ ಮಾದಕ ದ್ರವ್ಯಗಳಲ್ಲಿ ಆಲ್ಕೋಹಾಲ್ ಅಂಶದ ಪ್ರಮಾಣ ಪತ್ತೆಯಾಗಿರುವುದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು 17 ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:208/2007–08, ದಿನಾಂಕ:8ನೇ ಮೇ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಸಿ) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬ್ಕಾರಿ ಉಪ ನಿರೀಕ್ಷಕರು–2, (ಜಾರಿ ಮತ್ತು ತನಿಖೆ), ಟಿ.ನರಸೀಪುರ ವಲಯ ಇವರ ಪ್ರಮಾವ ಸಂಖ್ಯೆ:06/2007–08, ದಿನಾಂಕ:19.10.2007ರಂದು ವಶಪಡಿಸಿಕೊಂಡ ಸಂಖ್ಯೆ:ಕೆಎ–04/ಎಂಎ–601 ನೋಂದಣಿ ಸಂಖ್ಯೆಯ ಮಾರುತಿ–800 ವಾಹನವನ್ನು (86.400 ಲೀ. ನಕಲಿ ಮದ್ಯವನ್ನು ಈಗಾಗಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿರುತ್ತದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಮೇ ತಿಂಗಳ 8ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್–610

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:231/2007–08**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಪುಟ್ಟಬಸವಯ್ಯ,<br>ಅಬಕಾರಿ ನಿರೀಕ್ಷಕರು,<br>ಇ.ಐ.ಬಿ. ಮೈಸೂರು ವಿಭಾಗ. | | ಆರೋಪಿಗಳು ಪರಾರಿಯಾಗಿರುತ್ತಾರೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:16.11.2007ರಂದು ಸಂಜೆ 7.30 ಗಂಟೆಯ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ಗುಪ್ತ ವಾರ್ತಾ ವಿಭಾಗ, ಮೈಸೂರು ಇವರು ಮೈಸೂರು ನಗರ ಸಾತಗಳ್ಳಿ ಬಡಾವಣೆ, ಕೆ.ಇ.ಬಿ. ಪವರ್ ಸ್ಟೇಷನ್ ಹಿಂಭಾಗದ ರಸ್ತೆಯಲ್ಲಿ ಮಾರುತಿ ವ್ಯಾನ್ ಸಂಖ್ಯೆ: ಕೆಎ–05/ಎನ್–6302ರಲ್ಲಿ ಅಕ್ರಮವಾಗಿ 259.200 ಲೀ. ನಕಲಿ ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದಕ್ಕಾಗಿ ವಾಹನ ಮತ್ತು ನಕಲಿ ಮದ್ಯವನ್ನು ವಶಪಡಿಸಿಕೊಂಡು, ಪ್ರ.ಮಾ.ವ. ಸಂಖ್ಯೆ:07/07–08 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11 ಮತ್ತು 13, 14ರ ಪ್ರಕಾರ ಅಪರಾಧವಾಗಿದ್ದು, ಕಲಂ 32 ಮತ್ತು 34, 38(ಎ), 43ರ ಪ್ರಕಾರ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆಯನ್ನು ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಾಹನದ ಮಾಲೀಕತ್ವದ ವಿವರವನ್ನು ಕೋರಿ, ಬೆಂಗಳೂರು ದಕ್ಷಿಣ ವಲಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:28.11.2007ರಂದು ಪತ್ರ ಬರೆಯಲಾಗಿದ್ದು, ಇದಕ್ಕೆ ಯಾವುದೇ ಪ್ರತಿಕ್ರಿಯೆ ದೊರೆಯದ ಕಾರಣ, ದಿನಾಂಕ:17.01.2008ರಂದು ಮತ್ತೊಂದು ಪತ್ರ ವ್ಯವಹಾರ ನಡೆಸಲಾಗಿರುತ್ತದೆ. ಈ ಪ್ರಕರಣದಲ್ಲಿ ಜಪ್ತುಗೊಳಿಸಲಾದ 259.200 ಲೀ. ನಕಲಿ ಮದ್ಯವನ್ನು ಕರ್ನಾಟಕ ಅಬಕಾರಿ ಕಾಯ್ದೆ ರೀತ್ಯಾ ದಿನಾಂಕ:28.01.2008 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ಹೊರಡಿಸಲಾಗಿರುತ್ತದೆ. ವಶಪಡಿಸಿಕೊಂಡ ವಾಹನ ಮತ್ತು ಮದ್ಯವನ್ನು ಮುಟ್ಟುಗೋಲು ಹಾಕಿಕೊಳ್ಳಲು ಮೈಸೂರು ದಕ್ಷಿಣ ತಾಲ್ಲೂಕಿನ ಜಾರಿ ಮತ್ತು ತನಿಖೆಯ ಅಬಕಾರಿ ಉಪ ನಿರೀಕ್ಷಕರು ತಮ್ಮ ಪತ್ರ ದಿನಾಂಕ:06.12.2007ರಲ್ಲಿ ವರದಿ ಮಾಡಿರುತ್ತಾರೆ. ಬೆಂಗಳೂರು ದಕ್ಷಿಣ ವಲಯದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ವಾಹನದ ಮಾಲೀಕತ್ವವುಳ್ಳ ಬಿ ವಹಿಯ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಕಳುಹಿಸಿ, ಸದರಿ ವಾಹನದ ತೀರುವಳಿ (ಸಿ.ಸಿ.) ಪ್ರತಿಯನ್ನು ಬೆಂಗಳೂರಿನ ಪಶ್ಚಿಮ ವಲಯದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ವರ್ಗಾಯಿಸಿರುವುದಾಗಿ ತಿಳಿಸಿರುತ್ತಾರೆ. ಇವರ ವರದಿಯನ್ನಾಧರಿಸಿ, ಸಂಬಂಧಪಟ್ಟ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:18.02.2008 ಮತ್ತು 05.11.2008ರಂದು ಬಿ ವಹಿಗಾಗಿ ಪತ್ರ ವ್ಯವಹಾರ ನಡೆಸಲಾಗಿರುತ್ತದೆ. ಈ ಪತ್ರಗಳಿಗೆ ಸಾರಿಗೆ ಪ್ರಾಧಿಕಾರದಿಂದ ಇದೂವರೆವಿಗೂ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ.

ಕಡತ ಪರಿಶೀಲಿಸಲಾಯಿತು. ಕೆಳಕಂಡ ದಾಖಲಾತಿಗಳು ಕಂಡುಬಂದಿರುತ್ತವೆ.

1. ಶೋಧನಾ ಸಮುಚಿತ ಆಧಾರ
2. ಮಹಜರ್ ಕ್ರಮ
3. ಜಡ್ತಿಪತ್ರ
4. ಮಾದರಿ ಮೊಹರಿನ ನಕಲು
5. ಪ್ರಥಮ ಮಾಹಿತಿ ವರದಿ
6. ಸ್ವತ್ತಿನ ಪಟ್ಟಿ

ಮೇಲ್ಕಂಡ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:16.11.2007ರಂದು ಮೈಸೂರು ನಗರ ಸಾತಗಳ್ಳಿ ಬಡಾವಣೆ, ಕೆ.ಇ.ಬಿ. ಪವರ್ ಸ್ಟೇಷನ್ ಹಿಂಭಾಗದ ರಸ್ತೆಯಲ್ಲಿ ಮಾರುತಿ ವ್ಯಾನ್ ಸಂಖ್ಯೆ: ಕೆಎ–05/ಎನ್–6302 ರಲ್ಲಿ ಅಕ್ರಮವಾಗಿ 259.200 ಲೀ. ನಕಲಿ ಮದ್ಯವನ್ನು ಯಾವುದೇ ರಹದಾರಿಯಿಲ್ಲದೆ ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿಗಳು ತಲೆ ಮರೆಸಿಕೊಂಡಿರುತ್ತಾರೆ. ವಾಹನ ಬಿಡುಗಡೆಗಾಗಿ ಆರೋಪಿ/ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆದಿರುವುದಿಲ್ಲ ಹಾಗೂ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಸ್ತಾವನೆ ಮತ್ತು 43(ಬಿ) ವಾಹನ ಮಾಲೀಕರ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಅವರು ಪ್ರಾಧಿಕಾರದ ಮುಂದೆ

ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಜಪ್ತುಪಡಿಸಲಾದ ಮಾದಕ ದ್ರವ್ಯಗಳಲ್ಲಿ ಆಲ್ಕೋಹಾಲ್ ಅಂಶದ ಪ್ರಮಾಣ ಪತ್ತೆಯಾಗಿರುವುದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು 15 ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆಂದಾಗಲೀ ಯಾರೂ ಇಂದಿನವರೆಗೂ ಖುದ್ದಾಗಿ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ ಅಥವಾ ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದುದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:231/2007–08, ದಿನಾಂಕ:8ನೇ ಮೇ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬ್ಕಾರಿ ನಿರೀಕ್ಷಕರು, ಇ.ಐ.ಬಿ. ಮೈಸೂರು ವಿಭಾಗ ಇವರ ಪ್ರಮಾವ ಸಂಖ್ಯೆ:07/2007–08, ದಿನಾಂಕ:19.10.2007ರಂದು ವಶಪಡಿಸಿಕೊಂಡ ಸಂಖ್ಯೆ:ಕೆಎ–05/ಎನ್–6302 ನೋಂದಣಿ ಮಾರುತಿ ವ್ಯಾನ್ ವಾಹನವನ್ನು 259.200 ಲೀ. ನಕಲಿ ಮದ್ಯವನ್ನು ಈಗಾಗಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿರುತ್ತದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಮೇ ತಿಂಗಳ 8ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್–618

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:258/2007–08**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಎಂ.ಎಸ್. ಸುಸನ್ನ, | | ರಾಜು ಬಿನ್ ವರೀದ್ |
| ಅಬಕಾರಿ ನಿರೀಕ್ಷಕರು, | | ಚಿತ್ತಲಪಳ್ಳಿ ಹೌಸ್, ಕೈಪ ಮಂಗಳ ಅಂಚೆ, ತ್ರಿಶೂರ್ ಜಿಲ್ಲೆ, |
| ನಂಜನಗೂಡು ವಲಯ. | | ಕೇರಳಾ ರಾಜ್ಯ ಮತ್ತು ಇತರರು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:05.12.2007 ರಂದು ರಾತ್ರಿ 9.30 ಗಂಟೆಯ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ನಂಜನಗೂಡು ವಲಯ ಇವರು ನಂಜನಗೂಡು–ಗುಂಡ್ಲುಪೇಟೆ ಮುಖ್ಯರಸ್ತೆ, ಕಳಲೆ ಗೇಟ್ ಹತ್ತಿರ ಮಹಮ್ಮದ್ ಆಲಿಯವರಿಗೆ ಸೇರಿದ ತೋಟದ ಮನೆಯಲ್ಲಿ ಅಕ್ರಮವಾಗಿ 35 ಲೀ. ಸಂಸ್ಕರಿಸಿದ ಮದ್ಯ, 180 ಮಿಲಿಯ 912 ಖಾಲಿ ಸೀಸೆಗಳು, 5 ಕೆ.ಜಿ. ಮುಚ್ಚಳಗಳು, ಕೈಯಂತ್ರ, 1/2 ಹೆ.ಪಿ. ಮೋಟಾರ್, ಸಿಂಟೆಕ್ಸ್ ಟ್ಯಾಂಕ್, ಲೇಬಲ್‌ಗಳು, 8 ಖಾಲಿ ಕ್ಯಾನ್‌ಗಳು ಮತ್ತು ತಲಾ 35 ಲೀ.ನಂತೆ ಒಟ್ಟು 350 ಲೀ. ಬ್ಲೆಂಡ್ ಮದ್ಯ ಇಂತಹಾ ವಸ್ತುಗಳನ್ನು ದಾಸ್ತಾನು ಮಾಡಿ, ನಕಲಿ ಮದ್ಯ ತಯಾರಿಸಲು ತೊಡಗಿದ್ದು ಮತ್ತು ಇವುಗಳ ಸಾಗಾಣಿಕೆಗಾಗಿ ಟಾಟಾ ಸುಮೋ ಸಂಖ್ಯೆ: ಕೆಎ–03/ಎನ್–3754 ರಲ್ಲಿ ಉಪಯೋಗಿಸುತ್ತಿದ್ದ ಅಪರಾಧಕ್ಕಾಗಿ ವಾಹನ,

ಸಂಸ್ಕರಿಸಿದ ಮದ್ಯ ಮತ್ತು ನಕಲಿ ಮದ್ಯ ತಯಾರಿಕಾ ವಸ್ತುಗಳನ್ನು ವಶಪಡಿಸಿಕೊಂಡು, ಪ್ರ.ಮಾ.ವ. ಸಂಖ್ಯೆ:07/07–08ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 13 (1)(ಎ)(ಎಫ್) ಮತ್ತು 14ರ ಪ್ರಕಾರ ಅಪರಾಧವಾಗಿದ್ದು, ಕಲಂ 32, 34, 38(ಎ) ಹಾಗೂ 43(ಎ) ರ ಪ್ರಕಾರ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆಯನ್ನು ದಾಖಲಿಸಿ, ರಾಜು ಬಿನ್ ವರೀದ್, ರಾಜು ಆಂಥಣಿ, ಸಬೀರ್ ಇವರನ್ನು ದಸ್ತಗಿರಿ ಮಾಡಿ, ನ್ಯಾಯಾಲಯದ ಮುಂದೆ ಹಾಜರುಪಡಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಯಾರಿಂದ ವಾಹನವನ್ನು ವಶಪಡಿಸಿಕೊಳ್ಳಲಾಗಿದೆಯೋ ಅಂತಹ ವ್ಯಕ್ತಿಗಳಿಗೆ ದಿನಾಂಕ:31.12.2007ರಂದು ಕಾರಣ ಕೇಳುವ ನೋಟೀಸನ್ನು ನೀಡಲಾಗಿರುತ್ತದೆ.

ವಾಹನದ ಮಾಲೀಕತ್ವದ ವಿವರವನ್ನು ಕೋರಿ, ಬೆಂಗಳೂರು ಪೂರ್ವದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:31.12.2007 ಮತ್ತು 14.01.2008ರಂದು ಪತ್ರ ವ್ಯವಹಾರ ನಡೆಸಲಾಗಿರುತ್ತದೆ. ಈ ಪ್ರಕರಣದಲ್ಲಿ ಜಪ್ತುಗೊಳಿಸಲಾದ 35 ಲೀಗಳು. ಸಂಸ್ಕರಿಸಿದ ಮದ್ಯ, 180 ಮಿಲಿಯ 912 ಖಾಲಿ ಸೀಸೆಗಳು, 5 ಕೆ.ಜಿ. ಮುಚ್ಚಳಗಳು, ಕೈ ಯಂತ್ರ, 1/2 ಹೆ.ಪಿ. ಮೋಟಾರ್, ಸಿಂಟೆಕ್ಸ್ ಟ್ಯಾಂಕ್, ಲೇಬಲ್‌ಗಳು, 8 ಖಾಲಿ ಕ್ಯಾನ್‌ಗಳು ಮತ್ತು ತಲಾ 35 ಲೀ.ನಂತೆ ಒಟ್ಟು 350 ಲೀ. ಬ್ಲೆಂಡ್ ಮದ್ಯವನ್ನು ಕರ್ನಾಟಕ ಅಬಕಾರಿ ಕಾಯ್ದೆ ರೀತ್ಯಾ ದಿನಾಂಕ:28.01.2008ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಲಾಗಿರುತ್ತದೆ.

ನಂಜನಗೂಡು ತಾಲ್ಲೂಕು, ಜಾರಿ ಮತ್ತು ತನಿಖೆಯ ಅಬಕಾರಿ ನಿರೀಕ್ಷಕರು, ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ಈ ಹಿಂದೆ ಬರೆದ ಪತ್ರಗಳಿಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಯಾವುದೇ ಪ್ರತಿಕ್ರಿಯೆ ಇಲ್ಲದ ಕಾರಣ ಈ ಪ್ರಾಧಿಕಾರದಿಂದ ದಿನಾಂಕ:14.07.2008ರಂದು ಬೆಂಗಳೂರು ಪೂರ್ವ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಪತ್ರ ಬರೆಯಲಾಗಿರುತ್ತದೆ. ಸದರಿ ಪತ್ರಕ್ಕೆ ಪ್ರತಿಕ್ರಿಯಿಸಿ, ವಾಹನದ ಮಾಲೀಕತ್ವವುಳ್ಳ ಬಿ ವಹಿಯ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಇದನ್ನು ಪರಿಶೀಲಿಸಲಾಗಿ, ದಿನಾಂಕ:21.08.2006ರಂದು ತೀರುವಳಿ ಪತ್ರವನ್ನು ಮಡಿಕೇರಿ ಜಿಲ್ಲೆಗೆ ವರ್ಗಾಯಿಸಿರುವುದು ಕಂಡುಬಂದಿರುವುದರಿಂದ ದಿನಾಂಕ:01.09.2008 ಮತ್ತು 05.11.2008 ರಂದು ಕೊಡಗು ಜಿಲ್ಲೆಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಬಿ ವಹಿಯನ್ನು ಕಳುಹಿಸುವಂತೆ ಕೋರಿ, ಪತ್ರ ಬರೆಯಲಾಗಿರುತ್ತದೆ. ಅಂತೆಯೇ ಸದರಿ ವಾಹನದ ಬಿ ವಹಿಯ ಪ್ರತಿಯನ್ನು ಕಳುಹಿಸಿರುತ್ತಾರೆ. ಅದರಂತೆ ಬೆನ್ನಿ ಅಗಸ್ಟೀನ್, ನಂ.39/1, 80 ಅಡಿ ರಸ್ತೆ, ಮೈಕೇಲ್ ಪಾಳ್ಯ, ಬೆಂಗಳೂರು ಮತ್ತು ಸುಶೀಲಾ ಕೋಂ ನಾಣಯ್ಯ, ನಂ.69, ಕೊಡಂಬೂರು ಗ್ರಾಮ, ಮಡಿಕೇರಿ, ಕೊಡಗು ಜಿಲ್ಲೆ, ಇವರಿಗೆ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿದ್ದು, ಸದರಿ ನೋಟೀಸನ್ನು ವಿಳಾಸದಲ್ಲಿ ಇಲ್ಲವೆಂಬ ಷರಾದೊಂದಿಗೆ ಅಂಚೆ ಇಲಾಖೆಯವರು ಈ ಪ್ರಾಧಿಕಾರಕ್ಕೆ ಹಿಂದಿರುಗಿಸಿರುತ್ತಾರೆ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಗಿ, ದಿನಾಂಕ:05.12.2007ರಂದು ರಾತ್ರಿ 9–30 ಗಂಟೆಯ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ನಂಜನಗೂಡು ವಲಯ ಇವರು ನಂಜನಗೂಡು–ಗುಂಡ್ಲುಪೇಟೆ ಮುಖ್ಯ ರಸ್ತೆ, ಕಳಲೆ ಗೇಟ್ ಹತ್ತಿರ ಮಹಮ್ಮದ್ ಆಲಿಯವರಿಗೆ ಸೇರಿದ ತೋಟದ ಮನೆಯಲ್ಲಿ ಅಕ್ರಮವಾಗಿ 385 ಲೀ. ಬ್ಲೆಂಡ್ ಮದ್ಯ ಮತ್ತು ನಕಲಿ ಮದ್ಯ ತಯಾರಿಕಾ ವಸ್ತುಗಳನ್ನು ಹಾಗೂ ಇವುಗಳ ಸಾಗಾಣಿಕೆಗಾಗಿ ಉಪಯೋಗಿಸುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿ (1) ರವಿ ಬಿನ್ ವರೀದ್ (2) ಆಂಥಣಿ ಬಿನ್ ಜೋಣಾ (3) ಸಬೀರ್ ಬಿನ್ ಅಹಮದ್ ಇವರುಗಳನ್ನು ದಸ್ತಗಿರಿ ಮಾಡಲಾಗಿರುತ್ತದೆ. ಸದರಿ ಆರೋಪಿಗಳು ಈ ಪ್ರಾಧಿಕಾರದ ಮುಂದೆ ಹಾಜರಾಗಿ, ತಮ್ಮ ನಿಲುವು ಏನೆಂಬುದನ್ನು ತಿಳಿಸಿರುವುದಿಲ್ಲ. ಅಲ್ಲದೇ ವಾಹನ ಬಿಡುಗಡೆಗಾಗಿ ಆರೋಪಿ/ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆದಿರುವುದಿಲ್ಲ ಹಾಗೂ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಸ್ತಾವನೆ ಮತ್ತು 43(ಬಿ) ವಾಹನ ಮಾಲೀಕರ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಅವರು ಪ್ರಾಧಿಕಾರದ ಮುಂದೆ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಜಪ್ತು ಪಡಿಸಲಾದ ಮಾದಕ ದ್ರವ್ಯಗಳಲ್ಲಿ ಆಲ್ಕೋಹಾಲ್ ಅಂಶದ ಪ್ರಮಾಣ ಪತ್ತೆಯಾಗಿರುವುದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ. ಬಿ ವಹಿಯ ರನ್ವಯ ವಾಹನ ಮಾಲೀಕರಾದ ಶ್ರೀ ಬಿನ್ನಿ ಅಗಸ್ಟಿಯನ್ ಮತ್ತು ಸುಶೀಲಾ ಇವರ ಒಡೆತನದಲ್ಲಿದ್ದು, ಇವರು ಸಹ ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ನಡೆದಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು 14 ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ ಈ ಬಗ್ಗೆ ತಾನು ವಿಚಾರಣೆಯನ್ನು ನಡೆಸುತ್ತೇನೆಂದಾಗಲೀ ಯಾರೂ ಇಂದಿನವರೆಗೂ ಖುದ್ದಾಗಿ ಆಗಲಿ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ

ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನದ ಮಾಲೀಕರಿಗೆ ಅಥವಾ ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದಿಲ್ಲವಾದುದರಿಂದ ಸದರಿ ವಾಹನವನ್ನು ಇನ್ನೂ ಹಾಗೆಯೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:258/2007–08, ದಿನಾಂಕ:8ನೇ ಮೇ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರನ್ವಯ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43 (ಎ) (2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬ್ಕಾರಿ ನಿರೀಕ್ಷಕರು, ನಂಜನಗೂಡು ವಲಯ ಇವರ ಪ್ರಮಾವ ಸಂಖ್ಯೆ:07/2007–08, ದಿನಾಂಕ:05.12.2007ರಂದು ವಶಪಡಿಸಿಕೊಂಡ ಸಂಖ್ಯೆ:ಕೆಎ–03/ಎನ್–3754 ನೋಂದಣಿ ಟಾಟಾ ಸುಮೋ ವಾಹನವನ್ನು (385 ಲೀ. ಬ್ಲೆಂಡ್ ಮದ್ಯ ಮತ್ತು ನಕಲಿ ಮದ್ಯ ತಯಾರಿಕಾ ವಸ್ತುಗಳನ್ನು ಈಗಾಗಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿರುತ್ತದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಮೇ ತಿಂಗಳ 8ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್–620

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:266/2007–08, ದಿನಾಂಕ:8ನೇ ಮೇ, 2009**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಎನ್.ಟಿ. ಆನಂದಕುಮಾರ್, ಅಬಕಾರಿ ಉಪ ನಿರೀಕ್ಷಕರು, (ಜಾರಿ ಮತ್ತು ತನಿಖೆ), ಕೆ.ಆರ್.ನಗರ ತಾಲ್ಲೂಕು. | | ಎಸ್.ಕೆ. ಮಂಜುನಾಥ್ ಬಿನ್ ಕಾಳಯ್ಯ ಪಟೇಲ್ ರಾಜಣ್ಣ ಬೀದಿ, ಸಾಲಿಗ್ರಾಮ, ಕೆ.ಆರ್.ನಗರ ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:13.12.2007 ರಂದು ಬೆಳಿಗ್ಗೆ 9.30 ಗಂಟೆಯ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು, (ಜಾರಿ ಮತ್ತು ತನಿಖೆ), ಕೆ.ಆರ್.ನಗರ ತಾಲ್ಲೂಕು ಇವರು ಕೆ.ಆರ್.ನಗರ ತಾಲ್ಲೂಕು, ಮಿರ್ಲೆ ಹೋಬಳಿ, ದೇವಿತಂದ್ರೆ ಗ್ರಾಮದ ಸಾಲಿಗ್ರಾಮ–ಹಳ್ಳಿಮೈಸೂರು ಮುಖ್ಯ ರಸ್ತೆಯಲ್ಲಿ ಅಕ್ರಮವಾಗಿ ಒಟ್ಟು 21.240 ಲೀ. ನಕಲಿ ಮದ್ಯದ ಪೈಕಿ ಹೀರೋ ಹೋಂಡಾ ಸಿಡಿ–100 ಸಂಖ್ಯೆ: ಕೆಎ–06/ಕೆ–6267 ರಲ್ಲಿ 17.280 ಲೀ. ನಕಲಿ ಮದ್ಯ ಮತ್ತು ಮತ್ತೊಂದು ವಾಹನ ಕವಾಸಾಕಿ ಬಜಾಜ್ ಸಂಖ್ಯೆ: ಸಿಟಿಕ್ಯೂ–7697 ರಲ್ಲಿ 3.920 ಲೀ. ನಕಲಿ ಮದ್ಯ ಇದೂ ಅಲ್ಲದೇ ಖಾಲಿ ಸೀಸೆಗಳು, ಕೆರಾಮಲ್, ಮುಚ್ಚಳಗಳು ಮತ್ತು ಲೇಬಲ್‌ಗಳನ್ನು ಸಾಗಾಣಿಕೆ/ ಹೊಂದಿದ್ದ ಅಪರಾಧಕ್ಕಾಗಿ ವಾಹನ, ನಕಲಿ ಮದ್ಯ ಮತ್ತು ನಕಲಿ ಮದ್ಯ ತಯಾರಿಕಾ ವಸ್ತುಗಳನ್ನು ವಶಪಡಿಸಿಕೊಂಡು, ಪ್ರ.ಮಾ.ವ. ಸಂಖ್ಯೆ:07/07–08ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 13 (1)(ಎ)(ಎಫ್) ಮತ್ತು 14ರ ಪ್ರಕಾರ ಅಪರಾಧವಾಗಿದ್ದು, ಕಲಂ 32, 38(ಎ) ರ ಪ್ರಕಾರ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆಯನ್ನು ದಾಖಲಿಸಿ, ಆರೋಪಿ ಎಸ್.ಕೆ. ಮಂಜುನಾಥ್ ಬಿನ್ ಕಾಳಯ್ಯ ಇವರನ್ನು ದಸ್ತಗಿರಿ ಮಾಡಿ, ನ್ಯಾಯಾಲಯದ ಮುಂದೆ ಹಾಜರುಪಡಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಯಾರಿಂದ ವಾಹನವನ್ನು ವಶಪಡಿಸಿಕೊಳ್ಳಲಾಗಿದೆಯೋ ಅಂತಹ ವ್ಯಕ್ತಿಗಳಿಗೆ ಈ ಪ್ರಾಧಿಕಾರದ ದಿನಾಂಕ:01.11.2007 ರಂದು ವಾಹನ ಮತ್ತು ಅಬಕಾರಿ ವಸ್ತುಗಳನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ನೀಡಲಾಗಿರುತ್ತದೆ.

